# ಶ್ರೀ ಅನುಗ್ರಹ ವಿಠಲ ದೇವಸ್ಥಾನ

## ಹರಿದಾಸಾಶ್ರಮ

## ಯಾಯಾವರ ಕೀರ್ತನೆಗಳು



ಪುರಂದರದಾಸೋ ವಿಜಯತೇ



ಅಖಿಲ ಭಾರತ ಹರಿದಾಸ ಸಮ್ಮೇಳನ (ರಿ)

ಬಿ.ಇ.ಎಂ.ಎಲ್. ಬಡಾವಣೆ, 3ನೇ ಹಂತ, ರಾಜರಾಜೇಶ್ವರಿ ನಗರ, ಬೆಂಗಳೂರು - 98

ಫೋನ್ : 080-22723060 ಮೊಬೈಲ್ : 9342660711

ವೆಬ್‌ಸೈಟ್ : www.haridasa.info

ಮನ್ಮನೋಭೀಷ್ಟದಾತಾರಂ ಸರ್ವಾಭೀಷ್ಟ ಫಲಪ್ರದಂ।
ಪುರಂದರಗುರುಂ ವಂದೆ ದಾಸಶ್ರೇಷ್ಟಂ ದಯಾನಿಧಿಂ ॥

## ಯಾಯಾವರ - ಮಧುಕರವೃತ್ತಿ - ಉಂಛವೃತ್ತಿ

ಯಾಯಾವರ ಹರಿದಾಸರು ತೋರಿಕೊಟ್ಟ ಒಂದು ದಿಟ್ಟಹೆಜ್ಜೆ. ಜಗತ್ತಿನಲ್ಲಿ ಯಾವುದೂ ಸ್ಥಿರವಲ್ಲವೆಂದು ಭೋಗಪದಾರ್ಥಗಳ ಕಡೆಗೆ ಬೆನ್ನು ತೋರಿಸಿ ಭಗವಂತನೆಡೆಗೆ ಸಾಗುವ ಸಾಧಕರು ತಮ್ಮ ನಿತ್ಯದ ಬದುಕಿಗೆ ಕೊರತೆ ಉಂಟಾಗದಂತೆ, ನೀಡುವವರಿಗೆ ಭಾರವಾಗದಂತೆ ಧನ - ಧಾನ್ಯಗಳನ್ನು ಸಂಗ್ರಹಿಸಲು ಕೈಕೊಂಡ ವೃತ್ತಿ.

ಯಾಯಾವರವ ಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದಕೊಡದ ಲೋಭಿ
ಮಾಯ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ?
ದಾಸರೆಂದರೆ ಪುರಂದರದಾಸರಯ್ಯ

ಎಂಬುದಾಗಿ ಶ್ರೀ ವ್ಯಾಸರಾಜರು ನುಡಿದ ನುಡಿಯನ್ನು ನಡೆಯಲ್ಲಿ ಸಾಧಿಸಿದ ಪುಣ್ಯಾತ್ಮರು **ಶ್ರೀ ಪುರಂದರದಾಸರು.**

ಕಾಲಿಗೆ ಗೆಜ್ಜೆ ಕಟ್ಟಿ, ನೀಲವರ್ಣನ ಗುಣ ಆಲಾಪಿಸುತ್ತಾ ಬಲು ಓಲಗವನು ಮಾಡಿ ಆನಂದ ಅನುಭವಿಸಿ ಮನೆಯಿಂದ ಮನೆಗೆ ಹೋಗಿ ಅಜ್ಞಾನದ ನಿದ್ದೆಯಿಂದ ಜನತೆಯನ್ನು ಎಚ್ಚರಗೊಳ್ಳುವಂತೆ ಮಾಡಿ, ಸಂಗ್ರಹವಾದ ವಸ್ತುಗಳನ್ನು ಪಾಕಮಾಡಿಸಿ, ನೈವೇದ್ಯಾ ನಂತರ ಬ್ರಾಹ್ಮಣರಿಗೆ ಊಣಬಡಿಸಿ, ನಂತರ ತಾವು ಪ್ರಸಾದ ಸ್ವೀಕರಿಸುತ್ತಾ

ಸಾಲ ಮಾಡಲು ಬೇಡ ಸಾಲದೆಂದೆನಬೇಡ
ನಾಳೆಗೆ ಹೇಗೆಂಬೋ ಚಿಂತೆಬೇಡ ಎಂದು

ನಿರ್ಣಯಿಸಿ ಸಂಗ್ರಹ ಬುದ್ಧಿಯನ್ನು ಬಿಟ್ಟು, ಕೊಟ್ಟವರಿಗೆ ಕೃಷ್ಣನ ದಯೆಯೆಂಬ ತಂಬಿಟ್ಟನ್ನು ಕೊಟ್ಟವರು ದಾಸರು.

ಆ ಹಿಂದಿನ ವೈಭವದ ದಿನಗಳ ನೆನಪನ್ನು ಹಸಿರಾಗಿ ಉಣಿಸಲು ಮತ್ತೊಮ್ಮೆ ಈಗ ಹರಿದಾಸರುಗಳು ನಮ್ಮ ಮನೆಗೆ ಯಾಯಾವರಕ್ಕೆ ಬಂದಾಗ ತುಂಬು ಮನದಿಂದ ಭಿಕ್ಷೆ ಹಾಕಿ ದಾಸರಾಯರ ಹೃದ್ಗುಹವಾಸಿ ಶ್ರೀಶನ ಅನುಗ್ರಹಕ್ಕೆ ಪಾತ್ರರಾಗಿರಿ ಎಂದು ಕೋರುತ್ತೇವೆ.

ಇಂತು ವಂದನೆಗಳೊಂದಿಗೆ
**ಖಗವರಧ್ವಜ ವಿಠಲದಾಸಃ**

|| ಶ್ರೀ ಗುರುಭ್ಯೋನಮಃ ಹರಿಃ ಓಂ ||



ಕಡು ಕರುಣಿ ನೀನೆಂದರಿದು ಹೇ। ರೊಡಲ ನಮಿಸುವೆ ನಿನ್ನಡಿಗೆಬೆಂ।
ಬಿಡದೆ ಪಾಲಿಸು ಪರಮ ಕರುಣಾ ಸಿಂಧು ಎಂದೆಂದು ॥
ನಡುನಡುವೆ ಬರುತಿಪ್ಪವಿಘ್ನವ । ತಡೆದು ಭಗವನ್ನಾಮ ಕೀರ್ತನೆ ।
ನುಡಿದು ನುಡಿಸೆನ್ನಿಂದ ಪ್ರತಿ ದಿವಸದಲಿ ಮರೆಯದಲೆ ॥

(ಹ. ಸಾ. 28-20)

ಸರ್ವದೇಶವು ಪುಣ್ಯ ದೇಶವು । ಸರ್ವಕಾಲವು ಪರ್ವ ಕಾಲವು ।
ಸರ್ವ ಜೀವರುದಾನ ಪಾತ್ರರು ಮೂರು ಲೋಕದೊಳು ॥
ಸರ್ವ ಮಾತುಗಳೆಲ್ಲ ಮಂತ್ರವು । ಸರ್ವ ಕೆಲಸಗಳೆಲ್ಲ ಪೂಜೆಯು ।
ಶರ್ವ ವಂದ್ಯನ ವಿಮಲ ಮೂರ್ತಿ ಧ್ಯಾನವುಳ್ಳವಗೆ ॥

(ಹ. ಸಾ. 10-4)

### ಶ್ರೀ ಪುರಂದರ ವಿಠ್ಠಲೋ ವಿಜಯತೇ

## ಯಾಯಾವರ ಕೀರ್ತನೆಗಳು

ಗುರು ಮಧ್ವರಾಯರಿಗೆ ನಮೋ ನಮೋ ।
ನಮ್ಮ ಗುರು ಮಧ್ವಸಂತತಿಗೆ ನಮೋ ನಮೋ ॥ಪ॥

ಶ್ರೀ ಪಾದರಾಜರಿಗೆ ಗುರುವ್ಯಾಸರಾಯರಿಗೆ ।
ಗುರುವಾದಿರಾಜರಿಗೆ ನಮೋ ನಮೋ ॥೧॥

ರಾಘವೇಂದ್ರರಾಯರಿಗೆ ವೈಕುಂಠದಾಸರಿಗೆ ।
ಪುರಂದರ ದಾಸರಿಗೆ ನಮೋ ನಮೋ ॥೨॥

ಗುರು ವಿಜಯದಾಸರಿಗೆ ಭಾಗಣ್ಣದಾಸರಿಗೆ ।
ರಂಗ ಒಲಿದ ದಾಸರಿಗೆ ನಮೋ ನಮೋ ॥೩॥

ಪರಮ ವೈರಾಗ್ಯಶಾಲಿ ತಿಮ್ಮಣ್ಣದಾಸರಿಗೆ ।
ಹುಂಡೇಕಾರ ದಾಸರಿಗೆ ನಮೋ ನಮೋ ॥೪॥

ಗುರುಶ್ರೀಶ ವಿಠ್ಠಲನ ಪರಮಭಕ್ತರ ಚರಣ ।
ಸರಸಿಜ ಯುಗಗಳಿಗೆ ನಮೋ ನಮೋ ॥೫॥

ಸೇವೆ:- ಎಸ್. ಎನ್. ಜಯಸಿಂಹ : 9845250356

ತಿಳಿಯನು ಎಂದೆಂದಿಗನ್ಯ ।
ರಂಗನೊಲಿದ ದಾಸರು ಜಗನ್ಮಾನ್ಯ ||ಪ||

ಆಲವ ಮಹಾತ್ಮರೆಂಬ ಪುಣ್ಯ ಕೀರ್ತಿಗಳ ।
ನಿತ್ಯಕೇಳ್ವ ನರಧನ್ಯ ||ಅ.ಪ.||

ಹಿರಣ್ಯಕಶಿಪುಜ ಸಲ್ಹಾದನೇ ।
ಎರಡನೇ ಜನ್ಮ ಶಲ್ಯನಾದ ।
ಗುರುವಾದಿರಾಜ ರರ್ಚಿಸಿದ ।
ಪುರಂದರ ದಾಸರಲ್ಲುದಿಸಿದ ||೧||

ಐದನೆಯ ಜನ್ಮವು ಈಗಂತೆ ।
ಮುಂದೆ ಬಾಹೋವು ಏಳು ಜನ್ಮವಂತೆ ।
ಮೋದಾಭಿವೃದ್ಧಿಗೆ ಏನಂತೆ ।
ಎಂಬ ವಾದಿಗಳಿಗೆ ಅಂತೆಕಂತೆ ||೨||

ದಾಸಕೂಟಸ್ಥರಿಗೆ ಮಾತು ।
ಹಲವು ದೇಶಗಳಲ್ಲಿ ಅನುಭವವಾಯ್ತು ।
ಈ ಸುಕಥಾ ಸಲ್ಲಾಪ ವೆಲ್ಲಾಯ್ತು
ಶ್ರೀ ಪ್ರಾಣೇಶ ವಿಠ್ಠಲನಲ್ಲಿಹನಾಯ್ತು ||೩||

ಸೇವೆ:- ಸಿ. ಎನ್. ಪ್ರಸಾದ್ : 9900222904

ತಂದೆ ವಿಜಯರಾಯ ।
ಈ ವೇಳೆಗೆ ಬಂದ್ಯೋ ವಿಜಯರಾಯ ॥ಪ॥

ಹಿಂದೇಸು ಜನುಮವು ಮುಂದೇಸು ಜನುಮವು
ಒಂದು ತಿಳಿಯೆ ನಾ ಎಂದೆಂದಿಗೂ ಎನ್ನ ॥ಅ.ಪ॥

ಸೂರ್ಯನ ಸುತನಂತೆ ಅಲ್ಲಿ ಮಹಾ ಶೌರ್ಯ ದೂತರಂತೆ
ಕಾರ್ಯಾಕಾರ್ಯವು ತಿಳಿಯದೆ ನ್ನಿ ಪರಿಚಾರ್ಯ
ನೆಳೆಯುತಿರೆ ಭಾರ್ಯಳು ಮೊರೆ ಇಡೆ ॥೧॥

ಅದು ಧೈರ್ಯವು ನೋಡಿ ಸುದತಿ ತನ್ನ ಹೃದಯ
ಬದ್ಧಮಾಡಿ । ಮಧುಸೂದನ ಮುದ ತೀರಿತು ಎಂದು
ಒದರಿದಳ್ ಒದರಿದಳ್ ವಿಜಯರಾಯರೆಂದು ॥೨॥

ಕರಗಳನೆ ಕಟ್ಟಿ ಎಳೆಯುತಿರೆ ದೊರೆಗಳನೆ ಮುಟ್ಟಿ
ಸಿರಿಮೋಹನ ವಿಠ್ಠಲನ ಪಾದವ ತೋರಿ
ಧರೆಗೆ ತಂದು ಬಿಟ್ಟ ಕರುಣಾಳುವೆ ಎನ್ನ ॥೩॥

ದಾಸಶ್ರೇಷ್ಠರಾಯ । ಗೋಪಾಲ ದಾಸಶ್ರೇಷ್ಠರಾಯ ॥ಪ॥
ಅಸ್ಮದ್ಗುರ್ವಂತರ್ಗತ ವಿಜಯನ ॥ಅ.ಪ॥

ಅಪಮೃತ್ಯುವಿನ ಶೂಲೆಯ ತಾಳದೆ
ಶುಭಕರ ವಿಜಯ ಗುರುಗಳ ಪಾಡಿದ ॥೧॥

ಶಶಿಸೂರ್ಯರ ಆಭರಣ ಅಲಂಕೃತ
ಮಾಧವನಂಘ್ರಿಯ ಧ್ಯಾನಿಸಿ ಪಾಡಿದ ॥೨॥

ಜಗನ್ನಾಥ ವಿಠಲನ ಅಂತರಾತ್ಮದ
ನಂದನ ಜ್ಯೋತಿಯೆ ಬಾ ದಯದಿ ॥೩॥

ಗುರು ಪುರಂದರ ದಾಸರೇ
ನಿಮ್ಮ ಚರಣ ಕಮಲವ ನಂಬಿದೆ ||ಪ||

ಗರುವ ರಹಿತನ ಮಾಡಿ ಎನ್ನನು ಪೊರೆವ
ಭಾರವು ನಿಮ್ಮದೇ || ಅ.ಪ.||

ಒಂದು ಅರಿಯದ ಮಂದಮತಿ ನಾ
ಇಂದು ನಿಮ್ಮನು ವಂದಿಪೆ ।
ಇದಿರೇಶನ ಪಾದ ತೋರಿಸೋ ತಂದೆ
ಮಾಡೆಲೋ ಸತ್ಕೃಪೆ ||೧||

ಮಾರಜನಕನ ಸನ್ನಿಧಾನದಿ ಸಾರಗಾಯನ ಮಾಡುವ ।
ನಾರದರೆ ಈ ರೂಪದಿಂದಲಿ ಚಾರುದಶನ ತೋರಿದೆ ||೨||

ಪುರಂದರಾಲಯ ಷಟ್ಟದೊಳು ನೀ ನಿರುತ
ಧನವನು ಗಳಿಸಲು । ಪರಮ ಪುರುಷನು
ವಿಪ್ರನಂದದಿ ಕರವ ನೀಡಿ ಯಾಚಿಸೆ ||೩||

ಪರಮ ನಿರ್ಘೃಣ ಮನವನರಿತು ಹರಿಯು
ಸೂರೆಯಗೊಳಿಸಿದ । ಅರಿತು ಮನದಲಿ ಜರಿದು
ಭವಗಳ ತರುಣಿ ಸಹ ಹೊರ ಹೊರಟೆಯೊ ||೪||

ಅಜಭವಾದಿಗಳರಸನಾದ ವಿಜಯ ವಿಠ್ಠಲನ ಧ್ಯಾನಿಪ ।
ನಿಜ ಸುಜ್ಞಾನವ ಕೊಡಿಸಬೇಕೆಂದು ಭಜಿಪೆನೋ
ಕೇಳ್ ಗುರುವರ ||೫||

ಸೇವೆ:- ಎಂ. ಜಿ. ಗುರುರಾಜರಾವ್ : 22424864

ಬಾರೋ ರಾಘವೇಂದ್ರ ಬಾರೋ ।
ಕಾರುಣ್ಯವಾರಿಧಿಯೇ ಬಾರೋ ॥ಪ॥

ಆರಾಧಿಪ ಭಕ್ತರಭೀಷ್ಟ ಪೂರೈಸುವ
ಪ್ರಭುವೇ ಬಾರೋ ॥ಅ.ಪ.॥

ರಾಜವಂಶೋದ್ಭವನ ಪಾದ ರಾಜೀವ
ಭಂಗನೆ ಬಾರೋ ।
ರಾಜಾಧಿರಾಜರೊಳು ವಿರಾಜಿಸುವ
ಚೆಲುವ ಬಾರೋ ॥೧॥

ವ್ಯಾಸರಾಯನೆನಿಸಿ ನೃಪನ ಕ್ಲೇಷ
ಕಳೆದವನೇ ಬಾರೋ ।
ಶ್ರೀ ಸುಧೀಂದ್ರ ಕರ ಸಂಜಾತ
ವಾಸುದೇವಾರ್ಚಕನೆ ಬಾರೋ ॥೨॥

ಸನ್ಯಾಸ ಕುಲದೀಪ ಬಾರೋ ಸನ್ನುತ
ಮಹಿಮನೇ ಬಾರೋ ।
ಮಾನ್ಯ ಜಗನ್ನಾಥ ವಿಠ್ಠಲ ಪ್ರಪನ್ನ ಜನರ
ಪ್ರಭುವೇ ಬಾರೋ ॥೩॥

**ಸೇವೆ :- ಶ್ರೀಮತಿ ಬೃಂದ ನಾಗರಾಜ : 26764555**

ವ್ಯಾಸರಾಯರ ಬೇಸರದೆ ನೆನೆದಾಸೆ
ಪೂರೈಸಿಗೊಂಬೆನಾ ||ಪ||

ದಾಸರಾಯರಿಗಾಸು ಮಂತ್ರೋಪದೇಶವನ್ನೆ
ಮಾಡಿದ |
ದೇಶದೊಳಗೆ ವಿಶೇಷ ಮೆರೆದು ಅಶೇಷ
ಜನರುದ್ಧರಿಸಿದ ||೧||

ವಾಸುದೇವನ ದ್ವೇಷಿಗಳ ಅನಾಯಾಸದಿ
ನಿರಾಕರಿಸಿದ |
ದಾಸವರ್ಗವ ಪೋಷಿಸಲು
ನಿರ್ದೋಷ ಗ್ರಂಥ ವಿರಚಿಸಿದ ||೨||

ಭಾಸುರ ಚರಿತ ಭೇಶ ಭಾಸ
ಸುಕಾಷಾಯಾಂಬರ ಧರಿಸಿದ |
ವೀಶವಾಹನ ಕ್ಲೇಶಹ ಪ್ರಾಣೇಶ
ವಿಠ್ಠಲನ ಒಲಿಸಿದ ||೩||

ಮಹಿಮೆ ಸಾಲದೇ ।
ಇಷ್ಟೇ ಮಹಿಮೆ ಸಾಲದೇ ॥ಪ॥

ಅಹಿಶಯನನ ಒಲುಮೆಯಿಂದ ।
ಮಹಿಯೊಳೆಮ್ಮ ಶ್ರೀ ಪಾದರಾಯರ ॥ಅ.ಪ.॥

ಮುತ್ತಿನ ಕವಚ ಮೇಲ್ ಕುಲಾವಿ
ರತ್ನ ಕೆತ್ತಿದ ಕರ್ಣಕುಂಡಲ ।
ಕಸ್ತೂರಿ ತಿಲಕ ಶ್ರೀಗಂಧಲೇಪನ ।
ವಿಸ್ತಾರದಿಂದ ಮೆರೆದು ಬರುವ ॥೧॥

ವಿಪ್ರಹತ್ಯದೋಷ ಬರಲು ಕ್ಷಿಪ್ರ
ಶಂಖೋದಕದಿ ಕಳೆಯೆ ।
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ ಕಪ್ಪು
ವಸನ ಹಸನ ಮಾಡಿದ ॥೨॥

ಹರಿಗೆ ಸಮರ್ಪಿಸಿದೆ ನಾನಾ
ಪರಿಯ ಶಾಕಂಗಳನು ಭುಂಜಿಸೆ ।
ನರನು ನಗಲು ಶ್ರೀಶ ಕೃಷ್ಣನ
ಕರುಣದಿಂದ ಹಸಿಯ ಮಾಡಿದ ॥೩॥

ಸೇವೆ :– ಶ್ರೀಮತಿ ಶ್ರೀದೇವಿ ಪ್ರಹ್ಲಾದ್ : 9880939219

ಸಾರಿ ಭಜಿಸಿರೋ

ಟೀಕಾರಾಯರಂಘ್ರಿಯ ।
ಘೋರಪಾತಕಾಂಬುಧಿಯ ಪಾರು ಮಾಳ್ಪರ ॥ಪ॥

ಮೋದತೀರ್ಥರ ಮತವ ಸಾಧಿಸುವರ ।
ಪಾದಸೇವ್ಯರ ದುರ್ಬೋಧ ಕಳೆವರ ॥೧॥

ಭಾಷ್ಯ ತತ್ವವ ವಿಸ್ತಾರ ಮಾಳ್ಪರ ।
ದೋಷ ದೂರರ ಆದಿಶೇಷಾವೇಶರ ॥೨॥

ಕಾಮಗೆದ್ದರ ಹರಿಗೆ ಪ್ರೇಮ ಪೂರ್ಣರ ।
ನೇಮ ನಿತ್ಯರ ನಿಷ್ಕಾಮನಾಪರ ॥೩॥

ಮೋಕ್ಷದಾತರ ಅಕ್ಷೋಭ್ಯತೀರ್ಥರ ।
ಸಾಕ್ಷಿಲಿಪ್ಪರ ಅಪೇಕ್ಷೇ ರಹಿತರ ॥೪॥

ವಿಜಯ ವಿಠ್ಠಲ ನಂಘ್ರಿ ಭಜನೆ ಮಾಳ್ಪರ ।
ಕುಜನಭಂಜರ ದಿಗ್ವಿಜಯರಾಯರ ॥೫॥

ಸೇವೆ :- ಶ್ರೀಮತಿ ಹೇಮ ಜಯಸಿಂಹ : 9481241075

ಮೊದಲೊಂದಿಪೆ

ನಿನಗೆ ಗಣನಾಥ ||ಪ||

ಬಂದ ವಿಘ್ನಕಳೆ ಗಣನಾಥ ||ಅ.ಪ.||

ಹಿಂದೆ ರಾವಣನು ಮದದಿಂದ ನಿನ್ನ ಪೂಜಿಸದೆ ।
ಸಂದ ರಣದಲಿ ಗಣನಾಥ ||೧||

ಮಾಧವನಾಜ್ಞದಿ ಧರ್ಮರಾಜ ನಿನ್ನ ಪೂಜಿಸಲು ।
ಸಾಧಿಸಿದ ರಾಜ್ಯ ಗಣನಾಥ ||೨||

ಮಂಗಳ ಮೂರುತಿ ಗುರು ರಂಗವಿಠ್ಠಲನಪಾದ
ಭೃಂಗನೆ ಪಾಲಿಸೋ ಗಣನಾಥ ||೩||

ಪಾರ್ವತಿ ಪಾಲಿಸೆನ್ನ । ಮಾನಿನಿ ರನ್ನೆ ||ಪ||

ಪಾರ್ವತಿ ಭಕುತರ ಸಾರಥಿ ವಂದಿಪೆ
ಸುರಪತಿ ಗಜಮುಖ ಮೂರುತಿ ಮಾತೆ ||ಅ.ಪ.||

ಮನದಭಿಮಾನಿಯೆ ನೆನೆವೆನು ನಿನ್ನನು
ಅನುಗ್ರಹಿಸೆನ್ನನು ಅಂಬುಜ ಪಾಣಿಯೆ ||೧||

ಮಂಗಳೆ ಮೃಡನಂತರಂಗಳೆ ಹರಿಪದ
ಭೃಂಗಳೆ ತುಂಗಳೆ ಪನ್ನಗವೇಣಿಯೆ ||೨||

ಗುಣಪೂರ್ಣ ವೇಣುಗೋಪಾಲ ವಿಠ್ಠಲನ
ಕಾಣಿಸಿಕೊಡುವಂಥ ಶೂಲಿಯ
ರಾಣಿಯೆ ||೩||

ಕೈಲಾಸವಾಸ ಗೌರೀಶ ಈಶ ||ಪ||

ತೈಲಧಾರೆಯಂತೆ ಮನಸುಕೊಡು
ಹರಿಯಲ್ಲಿ ಶಂಭೋ ||ಅ.ಪ||

ಅಹೋರಾತ್ರಿಯಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೋ ಮಹಾದೇವನೆ ।
ಅಹಿಭೂಷಣನೆ ಎನ್ನವ ಗುಣಗಳೆಣಿಸದಲೆ
ವಿಹಿತ ಧರ್ಮಾದಿ ವಿಷ್ಣು ಭಕುತಿಯನು
ಕೊಡು ಶಂಭೋ ||೧||

ಮನಸು ಕಾರಣವಲ್ಲ ಪಾಪ ಪುಣ್ಯಕ್ಕೆಲ್ಲ
ಅನಲಾಕ್ಷ ನಿನ್ನ ಪ್ರೇರಣೆ ಇಲ್ಲದೆ ।
ದನುಜ ಮದಗಜವೈರಿ ದಂಡ ಪ್ರಣಾಮ ಮಾಳ್ಪೆ
ಮಣಿಸು ಈ ಶಿರವ ಸಜ್ಜನರ ಚರಣದಲಿ ||೨||

ಭಾಗೀರಥಿಧರನೆ ಭಯವ ಪರಿಹರಿಸಯ್ಯ
ಲೇಸಾಗಿ ಸಲಹೋ ಸಂತತ ಶರ್ವದೇವ ।
ಭಾಗವತ ಜನಪ್ರಿಯ ವಿಜಯ ವಿಠ್ಠಲನಂಘ್ರಿ
ಜಾಗು ಮಾಡದೆ ಭಜಿಪ ಭಾಗ್ಯವನು
ಕೊಡು ಶಂಭೋ ||೩||

ಸೇವೆ :- ಶ್ರೀ ಮುರಳಿ ಎನ್. : 9880105054

ಭಾರತಿ ಭಕುತಿಯನು ಕೊಡುವುದು
ಮಾರುತ ಸತಿ ನೀನು ||ಪ||

ಮೂರು ಲೋಕದೊಳಗಾರು ನಿನಗೆ ಸರಿ
ಮಾರಾರಿಗಳಿಂದಾರಾಧಿತಳೆ ||ಅ.ಪ||

ವಾಣಿ ಎನ್ನವದನದಲ್ಲಿಡು ಮಾಣದೆ ಹರಿಸ್ತವನ |
ವೀಣಾಧೃತ ಸುಪ್ಪಾಣಿಯೆ ಪಂಕಜ |
ಪಾಣಿಯೆ ಕೋಕಿಲಗಾನಿಯೆ ಪಾಲಿಸೆ ||೧||

ಸುಂದರಿ ಶುಭಕಾರಿ ಸುಮನಸವೃಂದ ಶೋಭಿತ ಕಬರಿ |
ಮಂದಹಾಸ ಮುಖದಿಂದ ನೋಡಿ ನಿನ್ನ |
ಕಂದನೆಂದು ಎನ್ನ ಮುಂದಕೆ ಕರೆಯೆ ||೨||

ಮಂಗಳಾಂಗಿ ಎನ್ನ ಅಂತರಂಗದೊಳಿರು ಮುನ್ನ |
ತುಂಗ ವಿಕ್ರಮ ತಂದೆ ಗೋಪಾಲ ವಿಠಲನ
ಹಿಂಗದೆ ನೆನೆವ ಸುಖಂಗಳ ನೀಡೇ ||೩||

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ||ಪ||
ವಾಗಭಿಮಾನಿ ವರ ಬ್ರಹ್ಮಾಣಿ |
ಸುಂದರ ವೇಣಿ ಸುಚರಿತ್ರಾಣಿ ||೧||

ಜಗದೊಳು ನ್ನಿ ಪೊಗಳುವೆನಮ್ಮ |
ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮ ||೨||

ಪಾಡುವೆ ಸ್ತುತಿಯ ಬೇಡುವ ಮತಿಯ |
ಪುರಂದರ ವಿಠಲನ ಹಿರಿಯ ಸೊಸೆಯೆ ||೩||

ಸೇವೆ :- ಶ್ರೀ ಆರ್. ಸುದರ್ಶನ್ : 9880708186

ಕೂಸಿನ ಕಂಡೀರಾ ।
ಮುಖ್ಯ ಪ್ರಾಣನ ಕಂಡೀರಾ ॥ಪ॥

ಬಾಲನ ಕಂಡೀರಾ ।
ಬಲವಂತನ ಕಂಡೀರಾ ॥ಅ.ಪ॥

ಆಂಜನೆ ಉದರದಿ ಪುಟ್ಟಿತು ಕೂಸು
ರಾಮನ ಚರಣಕೆ ಎರಗಿತು ಕೂಸು ।
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನೆ ಸುಟ್ಟಿತು ಕೂಸು ॥೧॥

ಬಂಡಿ ಅನ್ನವ ಉಂಡಿತು ಕೂಸು
ಬಕನ ಪ್ರಾಣವ ಹಿಂಡಿತು ಕೂಸು ।
ವಿಷದ ಲಡ್ಡುಗೆ ಮೆದ್ದಿತು ಕೂಸು
ಮಡದಿಗೆ ಪುಷ್ಪವ ತೊಟ್ಟಿತು ಕೂಸು ॥೨॥

ಮಾಯಾವಾದಿಗಳ ಗೆದ್ದಿತು ಕೂಸು
ದ್ವೈತ ಮತವನುದ್ಧರಿಸಿತು ।
ಮಧ್ವರಾಯರೆಂಬ ಹೆಸರಿನ ಕೂಸು
ಪುರಂದರ ವಿಠಲನ ಪ್ರೇಮದ ಕೂಸು ॥೩॥

ಸೇವೆಃ- ಶ್ರೀ ಎಸ್. ಶ್ರೀಹರಿ : 9845199763

ಭಾಗ್ಯದ ಲಕ್ಷ್ಮಿ ಬಾರಮ್ಮ ।
ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ ।।ಪ।।
ಹೆಜ್ಜೆಯ ಮೇಲೊಂದ್ಹೆಜ್ಜೆಯ ನಿಕ್ಕುತ ।
ಗೆಜ್ಜೆಯ ಕಾಲಿನ ನಾದವ ತೋರುತ ।
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ।।೧।।
ಕನಕ ವೃಷ್ಟಿಯ ಕರೆಯುತ ಬಾರೇ ।
ಮನಕಾಮನೆಯ ಸಿದ್ಧಿಯ ತೋರೆ ।
ದಿನಕರ ಕೋಟಿ ತೇಜದಿ ಹೊಳೆಯುವ ।
ಜನಕರಾಯನ ಕುಮಾರಿ ಬೇಗ ।।೨।।
ಅತ್ತಿತ್ತಗಲದೆ ಭಕ್ತರ ಮನೆಯೊಳು ।
ನಿತ್ಯಮಹೋತ್ಸವ ನಿತ್ಯ ಸುಮಂಗಲ ।
ಸತ್ಯವ ತೋರುತ ಸಾಧು ಸಜ್ಜನರ ।
ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ ।।೩।।
ಸಂಖ್ಯೆ ಇಲ್ಲದ ಭಾಗ್ಯವ ತೊಟ್ಟು ।
ಕಂಕಣ ಕೈಯ ಹಿಡಿಯುತ ಬಾರೆ ।
ಕುಂಕುಮಾಂಕಿತೆ ಪಂಕಜಲೋಚನೆ ।
ವೆಂಕಟ ರಮಣನ ಬಿಂಕದ ರಾಣಿ ।।೪।।
ಸಕ್ಕರೆ ತುಪ್ಪದ ಕಾಲುವೆ ಹರಿಸಿ ।
ಶುಕ್ರವಾರದ ಪೂಜೆಯ ವೇಳೆಗೆ ।
ಅಕ್ಕರೆಯುಳ್ಳ ಅಳಗಿರಿ ರಂಗನ ।
ಚೊಕ್ಕಪುರಂದರ ವಿಠಲನ ರಾಣಿ ।।೫।।

ಸೇವೆ :- ಶ್ರೀ ವಿಬುಧಪ್ರಿಯ ವಿಠಲದಾಸಃ : 9449815268

ಎಂದಿಗಾಹುದೋ ನಿನ್ನ ದರುಶನ ।
ಅಂದಿಗಲ್ಲದೆ ಬಂಧ ನೀಗದೋ ॥ಪ॥

ಗಾನಲೋಲ ಶ್ರೀ ವತ್ಸಲಾಂಛನ ।
ದಾನವಾಂತಕ ದೀನ ರಕ್ಷಕ ॥೧॥

ಯಾರಿಗೆ ಮೊರೆ ಇಡಲೋ ದೇವನೇ ।
ಸಾರಿ ಬಂದು ನೀ ಕಾಯೋ ಬೇಗನೇ ॥೨॥

ಗಜವ ಪೊರೆದೆಯೋ ಗರುಡ ಗಮನನೆ ।
ತ್ರಿಜಗ ಭರಿತ ಶ್ರೀ ವಿಜಯ ವಿಠ್ಠಲ ॥೩॥

ಸೇವೆಃ– ಶ್ರೀ ಎ. ಎನ್. ರಾಘವೇಂದ್ರರಾವ್ : 26390261

ವೆಂಕಟರಮಣನೆ ಬಾರೋ ।
ಶೇಷಾಚಲವಾಸನೆ ಬಾರೋ ॥ಪ॥

ಪಂಕನಾಭ ಪರಮ ಪವಿತ್ರ ।
ಶಂಕರ ಮಿತ್ರನೆ ಬಾರೋ ॥ ಅ.ಪ.॥

ಮುದ್ದುಮುಖದ ಮಗುವೇ ।
ನಿನಗೆ ಮುದ್ದು ಕೊಡುವೆನು ಬಾರೋ ।
ನಿರ್ದಯವೇಕೋ ನಿನ್ನೊಳಗೆ ನಾ ।
ಪೊಂದಿದ್ದೇನೋ ಬಾರೋ ॥೧॥

ಮಂದರಗಿರಿಯನೆತ್ತಿದ ।
ಆನಂದ ಮೂರುತಿಯೆ ಬಾರೋ ।
ನಂದನ ಕಂದ ಗೋವಿಂದ ಮುಕುಂದನೆ ।
ಇಂದಿರೆಯರಸನೆ ಬಾರೋ ॥೨॥

ಕಾಮನಯ್ಯ ಕರುಣಾಳೋ ।
ಶ್ಯಾಮಲ ವರ್ಣನೆ ಬಾರೋ ।
ಕೋಮಲಾಂಗ ಶ್ರೀ ಪುರಂದರ ವಿಠಲನೆ ।
ಸ್ವಾಮಿರಾಯನೆ ಬಾರೋ ॥೩॥

ಸೇವೆ:- ಶ್ರೀ ಎ. ಕೆ. ರಾಧಕೃಷ್ಣ: 26692996

ರಾಗ : ಪೀಲು

ಬಂದದ್ದೊಂದು ಚೆಂದ ಸಾಲದೇ ।
ಗೋವಿಂದನು ।
ಬಂದದ್ದೊಂದು ಚೆಂದ ಸಾಲದೇ ।। ಪ।।

ವಿಕಟಾಂಗಿ ಪೂತನಿಯ ಕೊಂದು ।
ಶಕಟಾಸುರನ ಕಾಲಲಿ ತುಳಿದು ।
ಧಿಕ್ಕಿಟ ಧಿಕ್ಕಿಟ ಧಿಕ್ಕಿಟ ಎನ್ನುತ ।
ಅಕ್ಕರೆಯಿಂದ ಕುಣಿಯುತ ಮನೆಗೆ ।।೧।।

ಗೋವರ್ಧನ ಗಿರಿಯ ನೆತ್ತಿ ।
ಗೋವುಗಳನೆ ಕಾಯ್ದುಕೊಂಡು ।
ಮಾವ ಕಂಸನನ್ನು ಕೊಂದು ।
ಆವ ಕಾಯುತ ಕುಣಿಯುತ ಮನೆಗೆ ।।೨।।

ಸರ್ವ ಸ್ಥಳದಿ ವ್ಯಾಪ್ತನಾದ ।
ಸರ್ವದೋಷ ರಹಿತನಾದ ।
ಸರ್ವವಂದ್ಯ ಪುರಂದರ ವಿಠಲ ।
ಸರ್ವಕಾಲದಿ ರಕ್ಷಿಸುವವನು ।।೩।।

ಸೇವೆ :- ಶ್ರೀ ಕೆ. ವಿ. ಗೋಪಿನಾಥ್ : 9845011536

ದೇವ ಬಂದ ನಮ್ಮ ಸ್ವಾಮಿ ಬಂದನೋ ||ಪ||
ದೇವರ ದೇವ ಶಿಖಾಮಣಿ ಬಂದನೋ ||ಅ.ಪ.||

ಉರಗಶಯನ ಬಂದ ಗರುಡ ಗಮನ ಬಂದ |
ನರಗೊಲಿದವ ಬಂದ ನಾರಾಯಣ ಬಂದ ||೧||

ಮಂದರೋದ್ಧಾರ ಬಂದ ಮಾ ಮನೋಹರ ಬಂದ
ವೃಂದಾವನ ಪತಿ ಗೋವಿಂದ ಬಂದನೋ ||೨||

ನಕ್ರಹರನು ಬಂದ ಚಕ್ರಧರನು ಬಂದ |
ಅಕ್ರೂರಗೊಲಿದ ತ್ರಿವಿಕ್ರಮ ಬಂದನೋ ||೩|

ಪಕ್ಷಿವಾಹನ ಬಂದ ಲಕ್ಷ್ಮೀರಮಣ ಬಂದ |
ಅಕ್ಷಯ ಫಲದ ಲಕ್ಷ್ಮಣಾಗ್ರಜ ಬಂದ ||೪||

ನಿಗಮಗೋಚರ ಬಂದ ನಿತ್ಯ ತೃಪ್ತನು ಬಂದ |
ನಗೆ ಮುಖ ಪುರಂದರ ವಿಠಲ ಬಂದನೋ ||೫||

ಸೇವೆ:- ಡಾ|| ಉಮಾದೇವಿ : 23125985

ವಾದಿರಾಜರಿಗೊಲಿದು ಬಂದು ।
ಸೋದೆಯ ಪುರದಲಿ ನಿಂತ ಕುದುರೆ ।
ಕುದುರೆ ಬಂದಿದೆ ।
ಚೆಲುವ ಕುದುರೆ ಬಂದಿದೆ ।।ಪ।।

ಮುಂಗಾಲು ಕೆದರಿ ಕುಣಿವ ಕುದುರೆ ।
ಹಿಂಗಾಲಲ ಸುರರ ಒದೆವ ಕುದುರೆ ।
ರಂಗನೆಂದರೆ ಒಲಿವ ಕುದುರೆ ।
ತುಂಗ ಹಯವದನ ಕುದುರೆ ।।೧।।

ಸುತ್ತ ಮುತ್ತಲಾಡುವ ಕುದುರೆ ।
ಮತ್ತವಾದಿಯ ಗೆಲ್ವ ಕುದುರೆ ।
ಶತ್ರುಗಳೆಲ್ಲರ ಬಡಿವ ಕುದುರೆ ।
ತತ್ವ ಹಯವದನ ಕುದುರೆ ।।೨।।

ಹಲ್ಲಣದೊಳಗೆ ನಿಲ್ಲದು ಕುದುರೆ ।
ಬೆಲ್ಲ ಕಡಲೆ ಮೆಲ್ಲುವ ಕುದುರೆ ।
ಫುಲ್ಲ ಭವನಿಗೊರೆದ ಕುದುರೆ ।
ಚೆಲ್ವ ಹಯವದನ ಕುದುರೆ ।।೩।।

ರಾಗ : ಮಿಶ್ರಬೇಹಾಗ್

ಕೃಷ್ಣ ಮೂರುತಿ ಕಣ್ಣ ಮುಂದೆ ನಿಂತಿದಂತಿದೆ ||ಪ||

ಮಸ್ತಕದಲಿ ಮಾಣಿಕದ ಕಿರೀಟ |
ಕಸ್ತೂರಿ ತಿಲಕದಿ ಹೊಳೆವ ಲಲಾಟ |
ಹಸ್ತದಿ ಕೊಳಲನೂದುವ ಓರೆ ನೋಟ |
ಕೌಸ್ತುಭ ಎಡಬಲದಲಿ ಜಲ್ಯಾಟ ||೧||

ಮಘಮಘಿಸುವ ಸೊಬಗಿನ ಸುಳಿಗರುಳು |
ಚಿಗುರು ತುಳಸಿ ವನಮಾಲೆಯ ಕೊರಳು |
ಬಗೆ ಬಗೆ ಹೊನ್ನುಂಗುರವಿಟ್ಟ ಬೆರಳು |
ಸೊಗಸಿನ ನಾಭಿಯ ತಾವರೆ ಅರಳು ||೨||

ಉಡಿದಾರ ಒಡ್ಯಾಣ ಸಕಲಾಭರಣ |
ಬೆಡಗು ಪೀತಾಂಬರ ಶತರವಿಕಿರಣ |
ಕಡಗ ಗಗ್ಗರ ಪೆಂಡೆಯ ನಿಟ್ಟ ಚರಣ |
ಒಡೆಯ ಪುರಂದರ ವಿಠಲನ ಕರುಣ ||೩||

ರಾಗ : ಮಲಯ ಮಾರುತ

ಇಟ್ಟಿಗೆ ಮೇಲೆ ನಿಂತ ನಮ್ಮ ವಿಠಲ ತಾನು ।
ಪುಟ್ಟ ಪಾದ ಊರಿ ನಿಂತ ಧಿಟ್ಟ ತಾನು ।।ಪ।।

ಪುಟ್ಟಪಾದ ಊರಿ ನಿಂತು ಗಟ್ಟಿಯಾಗಿ ನಿಂತುಕೊಂಡ
ಟೊಂಕದ ಮೇಲೆ ಕೈಯನಿಟ್ಟು
ಭಕ್ತರು ಬರುವುದು ನೋಡುವನಂತೆ ।।ಅ.ಪ।।

ಪಂಢರಪುರದಲ್ಲಿರುವನಂತೆ ।
ಪಾಂಡುರಂಗ ಎಂಬುವನಂತೆ ।
ಚಂದ್ರಭಾಗ ಪಿತನಿವನಂತೆ ।
ಅಂಗನೆ ರುಕ್ಮಿಣಿ ಅರಸನಂತೆ ।।೧।।

ಹಣದ ಆಸೆ ಇವಗಿಲ್ಲವಂತೆ ।
ಕನಕದಾಸೆ ಬೇಕಿಲ್ಲಂತೆ ।
ನಾದಬ್ರಹ್ಮ ಎಂಬುವರಂತೆ ।
ಭಕ್ತರ ಭಜನೆಗೆ ಒದಗುವನಂತೆ ।।೨।।

ಕರಿಯ ಕಂಬಳಿ ಹೊದ್ದಿಹನಂತೆ ।
ಹಣೆಗೆ ನಾಮ ತಿದ್ದಿಹನಂತೆ ।
ತುಳಸಿ ಮಾಲೆ ಹಾಕಿಹನಂತೆ ।
ಪುರಂದರ ವಿಠಲ ತಾ ನಿಂತಿಹನಂತೆ ।।೩।।

ಸೇವೆ :- ಶ್ರೀ ಎಂ. ಜಿ. ರಾಘವೇಂದ್ರರಾವ್ : 9880462592

ರಾಗ : ನಾದನಾಮಕ್ರಿಯೆ

ದಾಸನ ಮಾಡಿಕೋ ಎನ್ನ । ಸ್ವಾಮಿ ।
ಸಾಸಿರನಾಮದ ವೇಂಕಟರಮಣ ॥ಪ॥
ಇಷ್ಟು ಘಾಸಿ ಮಾಡುವರೇನೋ ಕರುಣ ಸಂಪನ್ನ ॥ಅ.ಪ.॥

ದುರ್ಬುದ್ಧಿಗಳನೆಲ್ಲ ಬಿಡಿಸೋ ।
ನಿನ್ನ ಕರುಣ ಕವಚವೆನ್ನ ಹರಣಕ್ಕೆ ತೊಡಿಸೋ ।
ಚರಣ ಸೇವೆ ಎನಗೆ ಕೊಡಿಸೋ ।
ಅಭಯಕರ ಪುಷ್ಪವನೆನ್ನ ಶಿರದಲ್ಲಿ ಮುಡಿಸೋ ॥೧॥

ದೃಢ ಭಕ್ತಿ ನಿನ್ನಲಿ ಬೇಡಿ । ನಾ ।
ಅಡಿಗೆರಗುವೆನಯ್ಯ ಅನುದಿನ ಪಾಡಿ ।
ಕಡೆಗಣ್ಣಲೇಕೆನ್ನ ನೋಡಿ । ಬಿಡುವೆ ।
ಕೊಡು ನ್ನಿ ಧ್ಯಾನವ ಮನಶುಚಿ ಮಾಡಿ ॥೨॥

ಮೊರೆ ಹೊಕ್ಕವರ ಕಾಯ್ವ ಬಿರುದು । ಎನ್ನ ।
ಮರೆಯದೆ ರಕ್ಷಣೆಯ ಮಾಡಯ್ಯ ಪೊರೆದು ।
ದುರಿತಗಳೆಲ್ಲವ ತರಿದು ।
ಸಿರಿಪುರಂದರ ವಿಠಲ ಎನ್ನನು ಪೊರೆದು ॥೩॥

ಸೇವೆ :- ಶ್ರೀಮತಿ ಗೌರಿ ಶ್ರೀನಿವಾಸ್ : 26793830

ನಂದೇನದೋ ಸ್ವಾಮಿ ನಿಂದೇ ಇದೆಲ್ಲವು ||ಪ||

ನಂದ ನಂದನ ಗೋವಿಂದ ಹರೇ ಕೃಷ್ಣ || ಅ.ಪ. ||

ಜನನ ಮರಣ ನಿಂದೇ ಜನ್ಮ ಸಾಧನ ನಿಂದೆ ।

ಅನುಕೂಲದರಿವೂ ನಿನ್ನದೇ ।

ತನುವು ಮನವು ನಿಂದೇ ಕಾಯ ದೊರೆವುದು ನಿಂದೇ ।

ಚಿನುಮಯ ಮೂರುತಿ ಅನುಮಾನ ಯಾಕಯ್ಯ ||೧||

ಕಾಯಕಷ್ಟವು ನಿಂದೇ ದೇಹದ ಬಲನಿಂದೇ ।

ನ್ಯಾಯ ಅನ್ಯಾಯವು ನಿನ್ನದೇ ।

ಬಾಯಿ ಮಾತು ನಿಂದೇ ಬರುವ ಭಾಗ್ಯ ನಿಂದೇ ।

ಕಾಯಜ ಪಿತ ನಿನ್ನ ಮಾಯೆ ತಿಳಿಯದಯ್ಯ ||೨||

ಯಾತ್ರೆ ತೀರ್ಥವು ನಿಂದೇ ಕ್ಷೇತ್ರದ ಫಲ ನಿಂದೇ ।

ಸತ್ಪಾತ್ರ ನೇಮವು ನಿನ್ನದೇ ।

ಧಾತ್ರಿಯೊಳ್ ಪರಿಪೂರ್ಣ ಕ್ಷೇತ್ರ ವೆಂಕಟ ವಿಠಲ ।

ಸ್ತೋತ್ರ ಮಾಳ್ಪುದು ವಿಚಿತ್ರ ನಿನ್ನದಯ್ಯ ||೩||

ಸೇವೆ:- ಶ್ರೀ ಕೆ. ವಿ. ಎಸ್. ಪ್ರಸಾದ್ : 9972583828

ತನು ನಿನ್ನದು ಜೀವನ ನಿನ್ನದು । ರಂಗ ॥ಪ॥

ಅನುದಿನದಲಿ ಬಾಹೋ ಸುಖ ದುಃಖ
ನಿನ್ನದಯ್ಯ ॥ಅ.ಪ.॥

ಸವಿನುಡಿ ವೇದ ಪುರಾಣ ಶಾಸ್ತ್ರಗಳೆಲ್ಲ
ಕಿವಿಗೊಟ್ಟು ಕೇಳುವ ಕಥೆ ನಿನ್ನದು ।
ನವಮೋಹನಾಂಗೇರ ರೂಪವ ಕಣ್ಣಲಿ
ಎವೆ ಇಕ್ಕದೆ ನೋಡುವ ನೋಟ ನಿನ್ನದಯ್ಯ ॥೧॥

ಒಡಗೂಡಿ ಗಂಧ ಕಸ್ತೂರಿ ಪರಿಮಳವೆಲ್ಲ
ಬಿಡದೆ ಲೇಪಿಸಿಕೊಂಬ ದೇಹ ನಿನ್ನದು ।
ಷಡುರಸದನ್ನಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ॥೨॥

ಮಾಯಾಪಾಶದ ಬಲೆಯೊಳು ಸಿಕ್ಕಿ ತೊಳಲುವ
ಕಾಯ ಪಂಚೇಂದ್ರಿಯಗಳು ನಿನ್ನವು ।
ಕಾಯಜಪಿತ ಕಾಗಿನೆಲೆಯಾದಿ ಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ ॥೩॥

ಸೇವೆ:- ಶ್ರೀ ಎನ್. ನಾಗರಾಜ : 26790942

ಭಿಕ್ಷೆಯ ಹಾಕಿರಿ ಜೋಳಿಗೆಗೆ
ಅಕ್ಷಯವಾಗುವುದು ನಿಮಗೆ ||ಪ||

ಕುಕ್ಷಿಣಿಯೊಳೆಲ್ಲವ ಪೊಂದಿರುವಾತನ
ಕುಕ್ಷಿಗೆ ಹಿತಕರ ಭಿಕ್ಷೆಯೆಂದೆನುತ
ಹೊಟ್ಟೆಗೆ ಇಲ್ಲದೆ ಬಂದಿಲ್ಲ ಕೊಟ್ಟರೆ
ಪುಟ್ಟದ ಕಟ್ಟನು ತರುವೆವು
ಅಷ್ಟು ಪಾಪಗಳ ಮಾಡಲು
ಕೃಷ್ಣ ದಯೆಯ ತಂಬಿಟ್ಟನು ಕೊಡುವೆವು ||೧||

ಶ್ರಾವಣ ಮಾಸದ ಶನಿವಾರ
ಯಾವನು ಕೊಡುವನೊ ಮನಸಾರ
ಜೀವನ ಕ್ಲೇಶದ ಪರಿಹಾರ
ಭಾವದಿ ಪೊಂದುವ ಸುಖಸಾರ ||೨||

ಮೊಸವಿಲ್ಲದ ದಾಸ ಪ್ರಸನ್ನ
ತೋಷಣ ವೈಭವ ಶ್ರೀಶನೆ ಬಲ್ಲನು
ಸಾಸಿರ ಸಾಸಿರ ನಾಣ್ಯದ ಕಾರ್ಯವ
ವೀಸಕೆ ಮಾಡುವ ದಾಸರ ಗುಂಪಿದು ||೩||

ಸೇವೆ:- ಶ್ರೀ ವಾಮನರಾವ್ : 26392835

ರಾಗ : ಕೇದಾರ

ಸಿಂಹರೂಪನಾದ ಶ್ರೀ ಹರಿ । ಸ್ವಾಮಿ ನಾಮಗಿರೀಶ ।।ಪ।।

ಒಮ್ಮನದಿಂದ ತನ್ನನು ಭಜಿಪರ ।
ಸಮ್ಮತದಿಂದಲಿ ಕಾಯ್ವ ನರಹರಿ ।।ಅ.ಪ ।।

ತರಳನು ಕರೆಯೆ ಸ್ತಂಭವು ಬಿರಿಯೆ ।
ತುಂಬ ಉಗ್ರವನು ತೋರಿದನು ।
ಕರುಳನು ಬಗೆದು ಕೊರಳೊಳು ಹಾಕಿ ।
ತರಳನ ಸಲಹಿದ ಶ್ರೀ ನರಸಿಂಹ ।। ೧।।

ಭಕ್ತರೆಲ್ಲ ಕೂಡಿ ಬಹುದೂರ ಓಡಿ ।
ಪರಮ ಶಾಂತಿಯನು ಬೇಡಿದರು ।
ಕರೆದು ತಾ ಸಿರಿಯ ತೊಡೆಯೊಳು ಕುಳ್ಳಿರಿಸಿ ।
ಪರಮ ಹರುಷವನು ತೋರಿದ ನರಹರಿ ।।೨।।

ಜಯ ಜಯ ಜಯವೆಂದು ಹೂವನೆ ತಂದು ।
ಹರಿ ಹರಿ ಹರಿ ಎಂದು ಸುರರೆಲ್ಲ ಸುರಿಯೆ ।
ಭಯ ನಿವಾರಣ ಭಾಗ್ಯ ಸ್ವರೂಪನೆ ।
ಪರಮ ಪುರುಷ ಶ್ರೀ ಪುರಂದರ ವಿಠಲ ।।೩।।

ಸೇವೆ :– ಶ್ರೀ ಹೆಚ್.ಪಿ. ಸೇತುಮಾಧವ : 9845448378

ನೆರೆನಂಬಿದೆ ಮದ್‌ಹೃದಯ ಮಂಟಪದೊಳು
ಪರಿಶೋಭಿಸುತಿರು ಪಾಂಡುರಂಗ ।
ಶರಣ ಜನರ ಸಂಸಾರ ಮಹಾಭಯ
ಹರಣ ಕರುಣ ಸಿರಿ ಪಾಂಡುರಂಗ ॥ಪ॥

ನೆರೆದಿಹ ಬಹುಜನರೊಳಿದ್ದರೂ ಮನ
ಸ್ಥಿರವಿಡು ನಿನ್ನಲಿ ಪಾಂಡುರಂಗ ।
ಪರಿಪರಿ ಕೆಲಸವು ನಿನ್ನ ಮಹಾಪೂಜೆ ನಿರುತ
ಎನಗೆ ಕೊಡು ಪಾಂಡುರಂಗ ॥೧॥

ಪರದೇವನೆ ನಿನ್ನ ಲೀಲಾಸ್ಮೃತಿಯನು ನಿರುತ
ಎನಗೆ ಕೊಡು ಪಾಂಡುರಂಗ ।
ಪರರಾಪೇಕ್ಷೆಯ ಬಿಡಿಸಿ ನಿರಂತರ ಪರಗತಿ
ಪಥ ತೋರೋ ಪಾಂಡುರಂಗ ॥೨॥

ಸುಖವಾಗಲಿ ಬಹುದುಃಖವಾಗಲಿ
ಸಖ ನೀನಾಗಿರು ಪಾಂಡುರಂಗ ।
ನಿಖಿಳಾಂತರ್ಗತ ವ್ಯಾಸವಿಠ್ಠಲ ತವ ಮುಖ
ಪಂಕಜ ತೋರೊ ಪಾಂಡುರಂಗ ॥೩॥

ಸೇವೆ :– ಶ್ರೀ ಕೆ. ಎಸ್. ಅಶ್ವಥನಾರಾಯಣರಾವ್ : 26393595

ಡಂಗುರವ ಸಾರಿರಯ್ಯ
ಡಿಂಗರಿಗರೆಲ್ಲರೂ ||ಪ||

ಭೂಮಂಡಲಕ್ಕೆ ಪಾಂಡುರಂಗ ವಿಠ್ಠಲ
ಪರದೈವವೆಂದು ||ಅ.ಪ.||

ಹರಿಯು ಮುಡಿದ ಹೂವು
ಹರಿವಾಣದೊಳಗಿಟ್ಟುಕೊಂಡು ।
ಹರುಷದಿಂದ ಹಾಡಿಪಾಡಿ ಕುಣಿದು
ಚಪ್ಪಾಳಿಕ್ಕುತ ||೧||

ಒಡಲು ಜಾಗಟೆಯ ಮಾಡಿ ನುಡಿವ
ನಾಲಗೆಯ ಪಿಡಿದು
ಬಿಡದೆ ಢಣ ಢಣ ಎಂದು
ಹೊಡೆದು ಚಪ್ಪಾಳಿಕ್ಕುತ ||೨||

ಇಂತು ಲೋಕಕ್ಕೆಲ್ಲ
ಲಕ್ಷ್ಮೀಕಾಂತನಲ್ಲದಿಲ್ಲವೆಂದು ।
ಸಂತತ ಶ್ರೀ ಪುರಂದರ ವಿಠ್ಠಲ
ಪರದೈವವೆಂದು ||೩||

ಸೇವೆ :– ಶ್ರೀ ಬಿ. ವಾಸುದೇವಮೂರ್ತಿ : 26770219

ತಟಿತ್ಕೋಟಿ ನಿಭಕಾಯ ಜಗನ್ನಾಥ
ವಿಠಲಯ್ಯ । ವಿಠಲಯ್ಯ ।।ಪ।।

ಭಜಿಸುವೆ ನಿನ್ನನು ಅಜಭವಸುರನುತ
ಭಜಕಾಮರತರು ಕುಜನ ಕುಠಾರ ।
ವಿಠಲಯ್ಯ - ವಿಠಲಯ್ಯ ।।೧।।

ನೀಕರುಣಿಸದೆ ನಿರಾಕರಿಸಲು ಎನ್ನ
ಸಾಕುವರಾರೋ ದಯಾಪರ ಮೂರುತಿ ।
ವಿಠಲಯ್ಯ - ವಿಠಲಯ್ಯ ।।೨।।

ಶರಣಾಗತರನು ಪೊರೆವೆನೆಂಬೋ ತವ
ಬಿರುದು ಕಾಯೋ ಕರಿವರದ ಜಗನ್ನಾಥ
ವಿಠಲಯ್ಯ - ವಿಠಲಯ್ಯ ।।೩।।

ವಿಠ್ಠಲ ಸಲಹೋ ಸ್ವಾಮಿ ನಮ್ಮ ವಿಠಲ
ಜಗದಂತರ್ಯಾಮಿ ।।ಪ।।

ಎಡಕೆ ವಿಠಲ ಬಲಕೆ ವಿಠಲ । ಎಡಕೆ ಬಲಕೆ ವಿಠಲ ।।೧।।

ತಂದೆ ವಿಠಲ ತಾಯಿ ವಿಠಲ । ತಂದೆ ತಾಯಿ ವಿಠಲ
ಬಂಧು ವಿಠಲ ಬಳಗ ವಿಠಲ ಬಂಧು ಬಳಗ ವಿಠಲ ।।೨।।

ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಯ ಭರದಿಂದ್ದ ।।
ಇವೆರಡರ ಬಾಧೆಗೆ ನಾ ಒಳಗಾದೆ ।
ಪುರಂದರ ವಿಠಲ ಪುರಂದರ ವಿಠಲ ।।೩।।

ಸೇವೆ :- ಶ್ರೀಮತಿ ಲತಾ ಶ್ರೀಪಾದ್ : 26850573

ಮಂಗಳಂ ಜಯ ಮಂಗಳಂ ||ಪ||

ನಿಗಮವ ತಂದೆ ಮತ್ಸ್ಯಗೆ ಮಂಗಳ
ಅಗಣಿತ ಮಹಿಮ ಕೂರ್ಮಗೆ ಮಂಗಳ ।
ಜಗವನುದ್ಧರಿಸಿದ ವರಾಹಗೆ ಮಂಗಳ
ಮಗುವನು ಕಾಯ್ದ ನರಸಿಂಹಗೆ ||೧||

ದಾನವ ಬೇಡಿದ ವಾಮನಗೆ ಮಂಗಳ
ಕ್ಷೋಣಿಪರನು ಕೊಂದಗೆ ಮಂಗಳ ।
ಜಾನಕೀ ದೇವಿಯ ರಮಣಗೆ ಮಂಗಳ
ಜ್ಞಾನಿಗಳನು ಕಾಯ್ದ ಗೋಪಾಲಗೆ ||೨||

ಬೌದ್ಧಾವತಾರದ ದೇವಗೆ ಮಂಗಳ
ಶುದ್ಧ ಅಶ್ವಾರೂಢಗೆ ಮಂಗಳ ।
ಮಧ್ವವಲ್ಲಭ ಹಯವದನಗೆ ಮಂಗಳ
ಉದ್ಧರಿಸುವ ದೇವಗೆ ಮಂಗಳ ||೩||
ಮಂಗಳಂ । ಮಂಗಳಂ ।

ಕಾಯೇನ ವಾಚಾ ....................
ನಾರಾಯಣೇತಿ ಸಮರ್ಪಯಾಮಿ
ಶ್ರೀ ಗುರು ಮಧ್ವೇಶಾರ್ಪಣಮಸ್ತು

**ಸೇವೆ :- ಶ್ರೀಮತಿ ರಮಾ ವೆಂಕಟೇಶ್ : 9880784682**

ಶ್ರೀ ಪತಿಯು ನಮಗೆ ಸಂಪದವೀಯಲಿ
ವಾಣಿಪತಿಯು ನಮಗೆ ದೀರ್ಘಾಯು ಕೊಡಲಿ ||ಪ||

ವರವಿಭುಧರನು ಪೊರೆಯೆ ವಿಷವ ಕಂಠದಲಿದ್ದ
ಹರ ನಿತ್ಯ ನಮಗೆ ಸಹಾಯ ಮಾಡಲಿ |
ನರರೊಳುನ್ನತವಾದ ನಿತ್ಯಭೋಗಂಗಳು
ಪುರುಹೂತ ಪೂರ್ಣ ಮಾಡಿಸಲು ಬಿಡದೆ ||೧||

ವಿನುತ ಸಿದ್ಧಿಪ್ರದ ವಿಘ್ನೇಶನ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರವೇರಲಿ |
ದಿನದಿನದಿ ಧನ್ವಂತ್ರಿ ಆಪತ್ತುಗಳ ಕಳೆದು
ಮನಹರುಷವಿತ್ತು ಮನ್ನಿಸಲು ಬಿಡದೆ ||೨||

ನಿರುತ ಸುಜ್ಞಾನವನು ಈವ ಗುರು ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ |
ಪುರಂದರ ವಿಠಲನ ಕರುಣೆಯಿಂದಲಿ ನಮಗೆ
ಸುರರೊಲುಮೆ ಸುಸ್ಥಿರವಾಗಲಿ ||೩||

ಸೇವೆ:- ಶ್ರೀಸಿ.ಎನ್. ಉಪೇಂದ್ರರಾವ್: 9901507608

# ಪುಸ್ತಕ ಪರಿಚಯ

## ಶ್ರೀನೃಸಿಂಹ ಸದಾಚಾರದೀಪಿಕಾ

ಪ್ರಕಾಶಕರು :- ಚಿಕ್ಕೇನಹಳ್ಳಿ ಶ್ರೀಅಹೋಬಲ ಲಕ್ಷ್ಮೀನರಸಿಂಹಸ್ವಾಮಿ ಸೇವಾ ಸಮಿತಿ, ಪದ್ಮನಾಭನಗರ, ಬೆಂಗಳೂರು- 70,
ದೂರವಾಣಿ :- 22429892, ಪುಟ ಗಳು :- 332, ಬೆಲೆ 60/-
**ಸಂಗ್ರಹ : ಸಿ.ಎನ್. ಉಪೇಂದ್ರರಾವ್**

ಸದಾಚಾರಕ್ಕೆ ಬಹಳ ಮಹತ್ವವಿದೆ. ಮೂರು ಲೋಕವನ್ನು ಉದ್ಧರಿಸುವ ಸಾಮರ್ಥ್ಯವಿದ್ದರೂ ಆಚಾರವನ್ನು ಬಿಟ್ಟಿರಬಾರದು ಎಂದು ಆಚಾರ್ಯರು ಆದೇಶಿಸಿದ್ದಾರೆ. ಇಂದಿನ ನಾಗರಿಕ ಜೀವನದಲ್ಲಿ ಸಮಯಾವಕಾಶದ ದೌರ್ಲಭ್ಯದಿಂದ ಆಚಾರವನ್ನು ಎಷ್ಟು ಸಂಕ್ಷೇಪಗೊಳಿಸಿದರೂ ಹೆಚ್ಚೆನಿಸುತ್ತದೆ. ಆದರೂ ಲೌಕಿಕ ಜೀವನಕ್ಕಾಗಿ ಕನಿಷ್ಠಪಕ್ಷದ ಆಚಾರವನ್ನು ಬಿಟ್ಟು ಇರುವುದಕ್ಕೆ ಶಾಸ್ತ್ರದ ಸಮ್ಮತಿ ಇಲ್ಲ. ಆದ್ದರಿಂದ ಸದಾಚಾರವನ್ನು ರೂಢಿಸಿಕೊಳ್ಳುವುದು ಅನಿವಾರ್ಯವಾದ ಕರ್ತವ್ಯ.

ಪ್ರಕೃತ ಪುಸ್ತಕವು ಸ್ನಾನ, ಗೋಪೀಚಂದನ ಧಾರಣೆ, ಸಂಧ್ಯಾವಂದನೆ, ದೇವರ ಪೂಜೆ, ವೈಶ್ವದೇವ ಮುಂತಾದ ನಿತ್ಯಕರ್ಮಗಳ ಬಗ್ಗೆ ಮಂತ್ರ ಸಹಿತವಾದ ವಿವರವನ್ನು ನೀಡಿದೆ. ವಾರ್ಷಿಕ ವಿಶೇಷ ದಿನಗಳಲ್ಲಿ ಬರುವ ವರಸಿದ್ಧಿ ವಿನಾಯಕ ವ್ರತ, ವರಮಹಾಲಕ್ಷ್ಮಿ ವ್ರತ ಮುಂತಾದ ನೈಮಿತ್ತಿಕ ಕರ್ಮಗಳ ವಿಧಾನವನ್ನು ತಿಳಿಸಿದೆ. ಅನೇಕ ಸ್ತೋತ್ರಗಳನ್ನು ಸಂಗ್ರಹಿಸಲಾಗಿದೆ.

ಪುಸ್ತಕ ತೆಗೆದ ಕೂಡಲೇ ಹುಟ್ಟಿನಿಂದ ಜಾತಿಯ ನಿರ್ಣಯವಲ್ಲ, ಕರ್ಮಾಚರಣೆಯಿಂದ ಜಾತಿಯ ನಿರ್ಣಯ ಮತ್ತು ಬ್ರಾಹ್ಮಣತ್ವ ಎನ್ನುವ ವಾಕ್ಯ ವಿಚಾರಣೀಯ.

ಒಟ್ಟಿನಲ್ಲಿ ಸಂಗ್ರಾಹ್ಯವಾದ ಕೃತಿ.